# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 815

ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 20.12.2021

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಬೆಸ್ಕಾಂ ನವರು ರಸ್ತೆಗಳ ಬದಿಯಲ್ಲಿರುವ ವಿದ್ಯುತ್ ಕಂಬಗಳನ್ನು ಸ್ಥಳಾಂತರಿಸಲು ಹಣದ ಬೇಡಿಕೆ ಇಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವತಿಯಿಂದ ರಸ್ತೆಗಳ ಬದಿಯಲ್ಲಿರುವ ವಿದ್ಯುತ್ ಕಂಬಗಳನ್ನು ಸ್ಥಳಾಂತರಿಸಲು ಸಂಬಂಧಪಟ್ಟ ಪ್ರಾಧಿಕಾರದವರು ಅಂದರೆ, ರಾಷ್ಟ್ರೀಯ ಹಾಗೂ ರಾಜ್ಯ ಹೆದ್ದಾರಿ ಪ್ರಾಧಿಕಾರದವರು, ಇತರೆ ಇಲಾಖೆಯವರು ಅಥವಾ ವಿದ್ಯುತ್ ಕಂಬವನ್ನು ಸ್ಥಳಾಂತರಿಸಬೇಕೆಂದು ಕೋರಿ ಅರ್ಜಿ ಸಲ್ಲಿಸುವ ಅರ್ಜಿದಾರರು KERC ರವರ "Conditions of Supply of |
| ಆ) | ಬಂದಿದ್ದಲ್ಲಿ, ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? | Electricity of Distribution Licensees" ಅನ್ವಯ ಈ ಕೆಳಗೆ ತಿಳಿಸಿದಂತೆ ಬೆಸ್ಕಾಂಗೆ ಶುಲ್ಕವನ್ನು ಪಾವತಿಸಿ ಕಂಬವನ್ನು ಸ್ಥಳಾಂತರಿಸಿ ಕೊಳ್ಳಬಹುದಾಗಿರುತ್ತದೆ.<br>1. ಬೆಸ್ಕಾಂನ ವತಿಯಿಂದ ಸ್ಥಳಾಂತರಿಬೇಕಾದ ವಿದ್ಯುತ್ ಕಂಬಗಳ ಸ್ಥಳ ಪರಿಶೀಲನೆ ಮಾಡಿ ತಾಂತ್ರಿಕ ಕಾರ್ಯ ಸಾಧ್ಯತೆಯ ಆಧಾರದ ಮೇಲೆ ಅಂದಾಜು ಪಟ್ಟಿಯ ವೆಚ್ಚದಲ್ಲಿ ಶೇ. 10% ರಷ್ಟು ಮೇಲ್ವಿಚಾರಣಾ ಶುಲ್ಕವನ್ನು ಅರ್ಜಿದಾರರಿಂದ ಬೆಸ್ಕಾಂಗೆ ಪಾವತಿಸಿಕೊಂಡು, ಸ್ವಯಂ ಕಾರ್ಯ ನಿರ್ವಹಣಾ ಯೋಜನೆಯಡಿಯಲ್ಲಿ ಬೆಸ್ಕಾಂ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಕಂಬವನ್ನು ಸ್ಥಳಾಂತರಿಸುವ ಕಾಮಗಾರಿಯನ್ನು ಕೈಗೊಳ್ಳಬಹುದು.<br>**ಅಥವಾ**<br>2. ಠೇವಣಿ ವಂತಿಗೆ (ಡಿ.ಸಿ.ಡಬ್ಲ್ಯೂ) ಆಧಾರದ ಮೇಲೆ ಸ್ಥಳಾಂತರಿಬೇಕಾದ ವಿದ್ಯುತ್ ಕಂಬಕ್ಕೆ ಅಂದಾಜು ಪಟ್ಟಿಯನ್ನು ತಯಾರಿಸಿ, ಅಂದಾಜು ಪಟ್ಟಿಯ ಸಂಪೂರ್ಣ ವೆಚ್ಚವನ್ನು ಅರ್ಜಿದಾರರಿಂದ ಬೆಸ್ಕಾಂಗೆ ಪಾವತಿಸಿಕೊಂಡು ವಿದ್ಯುತ್ ಕಂಬವನ್ನು ಬೆಸ್ಕಾಂ ವತಿಯಿಂದಲೇ ಸ್ಥಳಾಂತರಿಸಲಾಗುವುದು. |

| | | |
|---|---|---|
| | | ಮುಂದುವರೆದು, ಸ್ಥಳಾಂತರಿಬೇಕಾದ ವಿದ್ಯುತ್ ಕಂಬವು ಶಿಥಿಲಗೊಂಡು, ಇದರಿಂದಾಗಿ ಸಾರ್ವಜನಿಕರಿಗೆ ಅಪಾಯ ಉಂಟಾಗುವ ಸಾಧ್ಯತೆಗಳು ಇದ್ದಲ್ಲಿ, ಸಾರ್ವಜನಿಕ ಹಿತಾಸಕ್ತಿಯಿಂದ, ಯಾವುದೇ ಶುಲ್ಕವನ್ನು ಪಾವತಿಸಿಕೊಳ್ಳದೇ ಸದರಿ ವಿದ್ಯುತ್ ಕಂಬವನ್ನು ಬೆಸ್ಕಾಂ ವತಿಯಿಂದಲೇ ಸ್ಥಳಾಂತರಿಸಲಾಗುತ್ತದೆ. |

ಸಂಖ್ಯೆ: ಎನರ್ಜಿ 279 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು